ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 1865

ಸದಸ್ಯರ ಹೆಸರು : ಶ್ರೀ.ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)

ಉತ್ತರಿಸುವ ಸಚಿವರು : ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

ಉತ್ತರಿಸುವ ದಿನಾಂಕ : 24.03.2020

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಎಷ್ಟು ಸ್ಥಳಗಳಲ್ಲಿ ತೋಟಗಾರಿಕೆ ಫಾರಂಗಳಿವೆ; | ರಾಜ್ಯದಲ್ಲಿ 414 ಸ್ಥಳಗಳಲ್ಲಿ ತೋಟಗಾರಿಕೆ ಫಾರಂಗಳಿವೆ. |
| ಆ | ಸದರಿ ಫಾರಂಗಳಲ್ಲಿ ಯಾವ ಯಾವ ವಿಧದ ಹಣ್ಣುಗಳನ್ನು ಬೆಳೆಯಲಾಗುತ್ತಿದೆ; | ಸದರಿ ಫಾರಂಗಳಲ್ಲಿ ವಿವಿಧ ಜಾತಿಯ ಹಣ್ಣಿನ ಬೆಳೆಗಳಾದ ಮಾವು ಸಪೋಟ, ಸೀಬೆ, ನೇರಳೆ, ನಿಂಬೆ, ಪಪ್ಪಾಯ, ಗೋಡಂಬಿ, ದ್ರಾಕ್ಷಿ, ಕಿತ್ತಳೆ ಕೋಕೊ, ಹಲಸು, ಲಿಚ್ಛಿ, ಸೀತಾಫಲ, ಹುಣಸೆ, ಅಂಜೂರ, ಡ್ರ್ಯಾಗನ್ ಹಣ್ಣು, ಮಲಯನ್ ಆಪಲ್, ಕವಳೆ ಹಣ್ಣು, ಚಕ್ಕೋತ, ನೆಲ್ಲಿ ಮತ್ತು ಅನಾನಸ್ ಹಣ್ಣುಗಳನ್ನು ಹಾಗೂ ಇತರೆ ಜಾತಿಯ ಕಸಿ/ಸಸಿಗಳನ್ನು ಬೆಳೆಯಲಾಗುತ್ತಿದೆ. |
| ಇ | ಸದರಿ ಫಾರಂಗಳಲ್ಲಿ ಆಧುನಿಕ ಬೇಸಾಯ ಪದ್ಧತಿ ಹಾಗೂ ಹೊಸ ತಳಿಗಳ ಸಂಶೋಧನೆಗೆ ಯಾವುದಾದರೂ ಯೋಜನೆಯನ್ನು ರೂಪಿಸಲಾಗಿದೆಯೇ; | ಹೌದು, ರೂಪಿಸಲಾಗಿದೆ. |
| ಈ | ಹಾಗಾದಲ್ಲಿ ಸದರಿ ಯೋಜನೆಯ ರೂಪುರೇಷೆಗಳು ಹಾಗೂ ಅಂದಾಜು ಮೊತ್ತವೆಷ್ಟು; (ವಿವರ ನೀಡುವುದು) | ಈ ಯೋಜನೆಗಳ ರೂಪುರೇಷೆಗಳು ವಿವರ ಈ ಕೆಳಗಿನಂತಿವೆ.<br>ಆಯ್ದ 100 ತೋಟಗಾರಿಕೆ ಕ್ಷೇತ್ರಗಳನ್ನು ಮಾದರಿ ತೋಟಗಾರಿಕೆ ಕ್ಷೇತ್ರಗಳನ್ನಾಗಿ ಅಭಿವೃದ್ಧಿಪಡಿಸಲು ಯೋಜನೆಯನ್ನು ರೂಪಿಸಿ ಅನುಷ್ಠಾನಗೊಳಿಸಲಾಗುತ್ತಿದೆ. ಈ ಕ್ಷೇತ್ರಗಳಲ್ಲಿ ಹೊಸ ಜಾತಿ ಮತ್ತು ತಳಿಗಳನ್ನು ನೆಟ್ಟು ಪೋಷಿಸಲಾಗುತ್ತಿದೆ.<br>ಮುಂದುವರೆದು, ವಿವಿದ ಬೆಳೆಗಳಿಗೆ ಉದಾಹರಣೆಗೆ ಮಾವು, ತರಕಾರಿ, ಹೂವು, ರಸಾವರಿ ಘಟಕಗಳು, ಹೈಟೆಕ್ ಪಾಲಿಹೌಸ್ ನಲ್ಲಿ ಉತ್ಪಾದನೆ, ಆಟೋಮೇಷನ್, ಮಲ್ಚಿಂಗ್, ಜೈವಿಕ ಗೊಬ್ಬರ ಉತ್ಪಾದನೆ, ಸೌರ ವಿದ್ಯುತ್ ಬಳಕೆ, ಹನಿ ನೀರಾವರಿ ಅಳವಡಿಕೆ, ಇಸ್ರೇಲ್ ತಂತ್ರಜ್ಞಾನ ಅಳವಡಿಕೆ, ಕೀಟ ಮತ್ತು ರೋಗಗಳ ನಿಯಂತ್ರಣಕ್ಕಾಗಿ ಪ್ರಾತ್ಯಕ್ಷಿಕೆ ಇತ್ಯಾದಿ ಆಧುನಿಕ ತಂತ್ರಜ್ಞಾನಗಳು, ಸಂಶೋಧನಾ ಫಲಿತಾಂಶಗಳನ್ನು ಹಾಗೂ ಉತ್ತಮ ಬೇಸಾಯ ಪದ್ಧತಿಳನ್ನು ಅಳವಡಿಸಿಕೊಳ್ಳಲಾಗಿದೆ. |

ಈ ಬಾಬ್ತು 2019-20ನೇ ಸಾಲಿನಲ್ಲಿ ಅಂದಾಜು ಮೊತ್ತ ರೂ.13.00 ಕೋಟಿಗಳು ವಿವರ ಕೆಳಕಂಡಂತಿವೆ.

(ರೂ.ಕೋಟಿಗಳಲ್ಲಿ )

| ಕ್ರ.ಸಂ. | ವೆಚ್ಚದ ಬಾಬ್ತು | ಅನುದಾನ |
|---|---|---|
| 1 | 2017-18ನೇ ಸಾಲಿನಲ್ಲಿ ಅಭಿವೃದ್ಧಿಗೊಳಿಸಲಾದ 30 ಮಾದರಿ ಕ್ಷೇತ್ರಗಳು ಹಾಗೂ 2018-19ನೇ ಸಾಲಿನ 40 ಮಾದರಿ ಕ್ಷೇತ್ರಗಳ ನಿರ್ವಹಣೆ, 2019-20ನೇ ಸಾಲಿಗೆ 30 ಕ್ಷೇತ್ರಗಳನ್ನು ಮಾದರಿ ತೋಟಗಾರಿಕೆ ಕ್ಷೇತ್ರಗಳನ್ನಾಗಿ ಅಭಿವೃದ್ಧಿಪಡಿಸುವುದು. | 10.00 |
| 2 | ತೋಟಗಾರಿಕೆ ಕ್ಷೇತ್ರ ಮತ್ತು ನರ್ಸರಿಗಳ ನಿರ್ವಹಣೆ | 2.64 |
| 3 | ಕ್ಷೇತ್ರಮಟ್ಟದ ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ ತರಬೇತಿ ಕಾರ್ಯಕ್ರಮ | 0.10 |
| 4 | ಇತರೆ (ಸಸ್ಯ ಸಂತೆ ಯೋಜನೆ, ಸಾಗಾಣಿಕೆ ವೆಚ್ಚ, ಪುಸ್ತಕ ಮತ್ತು ಮಾಹಿತಿ ಪ್ರಕಟಣೆ, ಪ್ರಯಾಣ ವೆಚ್ಚ, ಸ್ಟೇಷನರಿ ವೆಚ್ಚ, ವಿದ್ಯುತ್ ವೆಚ್ಚ, ನೀರಿನ ಕರ, ಇಂಧನ ವೆಚ್ಚ) | 0.26 |

HORTI 185 HGM 2020

(ನಾರಾಯಣ ಗೌಡ)

ಪೌರಾಡಳಿತ, ತೋಟಗಾರಿಕೆ ರೇಷ್ಮೆ ಸಚಿವರು.